# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1525
ಸದಸ್ಯರ ಹೆಸರು : ಶ್ರೀ ಕೆ. ಗೋವಿಂದರಾಜ್
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಬೆಂಗಳೂರು ನಗರ ಸೇರಿದಂತೆ ರಾಜ್ಯದಾದ್ಯಂತ ಕಳೆದ 3 ವರ್ಷಗಳ ಅವಧಿಯಲ್ಲಿ ವಿವಿಧ ಪ್ರಕರಣಗಳಡಿ ಜಪ್ತಿಯಾಗಿರುವ (ಎಲ್ಲಾ ಮಾದರಿ ವಾಹನಗಳ) ಸಂಖ್ಯೆ ಎಷ್ಟು ; (ಪೊಲೀಸ್ ಠಾಣಾವಾರು, ಪ್ರಕರಣವಾರು ಪ್ರತ್ಯೇಕ ಮಾಹಿತಿ ಒದಗಿಸುವುದು)</td><td>ಬೆಂಗಳೂರು ನಗರ ಸೇರಿದಂತೆ ರಾಜ್ಯದಾದ್ಯಂತ ಕಳೆದ 3 ವರ್ಷಗಳ ಅವಧಿಯಲ್ಲಿ ವಿವಿಧ ಪ್ರಕರಣಗಳಡಿ ಜಪ್ತಿಯಾಗಿರುವ ಎಲ್ಲಾ ಮಾದರಿಯ ವಾಹನಗಳ ಸಂಖ್ಯೆ ಈ ಕೆಳಕಂಡಂತಿದೆ.<br><table>
<tr><th>ವರ್ಷ</th><th>ಪ್ರಕರಣಗಳ ಸಂಖ್ಯೆ</th><th>ಜಪ್ತಿ ಪಡಿಸಿಕೊಂಡ ವಾಹನಗಳ ಸಂಖ್ಯೆ</th></tr>
<tr><td>2018</td><td>23474</td><td>36060</td></tr>
<tr><td>2019</td><td>25332</td><td>36982</td></tr>
<tr><td>2020</td><td>24806</td><td>40582</td></tr>
<tr><td>2021 ಫೆಬ್ರವರಿ 28ರ ವರೆಗೆ)</td><td>4312</td><td>6663</td></tr>
</table><br>ಜಪ್ತಿ ಪಡಿಸಿಕೊಂಡಿರುವ ವಾಹನಗಳ ಪೊಲೀಸ್ ಠಾಣಾವಾರು ಮತ್ತು ಪ್ರಕರಣವಾರು ಮಾಹಿತಿಯನ್ನು ಪ್ರತ್ಯೇಕವಾಗಿ ಸಿಡಿ ಯಲ್ಲಿ ಒದಗಿಸಲಾಗಿದೆ.</td></tr>
<tr><td>(ಆ)</td><td>ಜಪ್ತಿಯಾದ ವಾಹನಗಳನ್ನು ಆಯಾಯ ಪೊಲೀಸ್ ಠಾಣಾ ಪ್ರದೇಶದ ಸುತ್ತಮುತ್ತಲಿನ ಜಾಗಗಳಲ್ಲಿ ನಿಲುಗಡೆ ಮಾಡಿದ್ದು, ಇದರಿಂದ ರಸ್ತೆಯಲ್ಲಿ ಓಡಾಡಲು ಆಗುತ್ತಿರುವ ತೊಂದರೆ, ಪರಿಸರ ಮಾಲಿನ್ಯ ವಾಹನಗಳ ಬಿಡಿ ಭಾಗಗಳ ಕಳವೂ ಸೇರಿದಂತೆ ಆಗುತ್ತಿರುವ ಅನಾನುಕೂಲತೆಗಳನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆಯೇ ? ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಕೈಗೊಂಡ ಕ್ರಮಗಳ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸುವುದು.</td><td>ಪೊಲೀಸರು ಜಪ್ತಿಪಡಿಸಿಕೊಳ್ಳುವ ವಾಹನಗಳನ್ನು ಸುರಕ್ಷಿತವಾಗಿ ನಿಲುಗಡೆ ಮಾಡಿ ಸಂರಕ್ಷಿಸಲು ಬೆಂಗಳೂರು ನಗರ ಪೊಲೀಸ್ ಘಟಕಕ್ಕೆ ಒಟ್ಟು 18 ಎಕರೆಗಳ ಜಮೀನನ್ನು ಮಂಜೂರು ಮಾಡಿದ್ದು, ಈ ಕೆಳಕಂಡ ಸೌಲಭ್ಯಗಳೊಂದಿಗೆ ಯೋಜನೆ ರೂಪಿಸಲಾಗಿದೆ.<br>1. ವಾಹನ ನಿಲುಗಡೆ ಪ್ರದೇಶದ ಸುತ್ತಲೂ ಕಾಂಪೌಂಡ್ ಗೋಡೆಯ ನಿರ್ಮಾಣ<br>2. ಕಾವಲಿಗೆ ನೇಮಿಸುವ ಭದ್ರತಾ ಸಿಬ್ಬಂದಿಗೆ ಗಾರ್ಡ್ ರೂಂ ನಿರ್ಮಾಣ<br>3. ನೀರಿಗಾಗಿ ಬೋರ್‌ವೆಲ್ ಒಂದನ್ನು ಕೊರೆಸುವುದು.<br>4. ವಿದ್ಯುಚ್ಛಕ್ತಿಯ ಸೌಲಭ್ಯವನ್ನು ಒದಗಿಸುವುದು.<br>5. ವಿದ್ಯುಚ್ಛಕ್ತಿ ಇಲ್ಲದಿದ್ದಾಗ ಬ್ಯಾಕ್‌ಅಪ್‌ಗಾಗಿ ಯು.ಪಿ.ಎಸ್‌ನ ಸೌಲಭ್ಯ<br>6. ಎರಡೂವರೆ ಅಡಿಯಷ್ಟು ಫೆನ್ಸಿಂಗ್ / ಬಾರ್‌ಬೇಡ್ ಅಳವಡಿಕೆ.<br>7. ಜಾಗವನ್ನು ಸಮತಟ್ಟು ಮಾಡುವುದು.<br>8. ಕ್ರಿಮಿನಲ್ ಪ್ರಕರಣಗಳಲ್ಲಿ ಸರಕು ಸಹಿತ ಅಮಾನತ್ತು ಪಡಿಸಿಕೊಳ್ಳುವ ಬೆಲೆ ಬಾಳುವ ದುಬಾರಿ ವಾಹನಗಳು, ಜೊತೆಗೆ ಭಾರಿ ಮತ್ತು ಮಧ್ಯಮ ಗಾತ್ರದ ಸುಮಾರು 200 ವಾಹನಗಳ ನಿಲುಗಡೆಗೆ ಅನುವಾಗುವಂತೆ ಶೆಡ್ ಒಂದರ ನಿರ್ಮಾಣ.<br>ಮುಂದುವರೆದಂತೆ ವಿವಿಧ ನಗರ ಮತ್ತು ಜಿಲ್ಲಾ ಘಟಕಗಳಲ್ಲಿ ಪೊಲೀಸ್ ಠಾಣೆ ಆವರಣದಲ್ಲಿ ಮತ್ತು ಸಿಎಆರ್/ಡಿಎಆರ್ ಗಳಲ್ಲಿ ಲಭ್ಯವಿರುವ ಸ್ಥಳಗಳಲ್ಲಿ ಜಪ್ತಿಪಡಿಸಿಕೊಂಡಿರುವ ವಾಹನಗಳನ್ನು ಸುರಕ್ಷಿತವಾಗಿ ನಿಲ್ಲಿಸಲಾಗುತ್ತಿದೆ.</td></tr>
</table>

**ಹೆಚ್‌ಡಿ 199 ಎಸ್‌ಎಸ್‌ಟಿ 2021**

**(ಬಸವರಾಜ ಬೊಮ್ಮಾಯಿ)**
**ಗೃಹ ಮತ್ತು ಕಾನೂನು,**
**ಸಂಸದೀಯ ವ್ಯವಹಾರಗಳು**
**ಮತ್ತು ಶಾಸನ ರಚನಾ ಸಚಿವರು**